# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 954 |
| ಮಾನ್ಯ ಸದಸ್ಯರ ಹೆಸರು | ಶ್ರೀ ಘೋಟ್ನೆಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 17.12.2018 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಶಂಕರಪ್ಪನವರ ವರದಿಯಂತೆ ಮರಾಠ ಸಮಾಜವನ್ನು ಕೂಡಲೇ 3 'ಬಿ' ಯಿಂದ 2(ಎ)ಗೆ ಸೇರಿಸಲು ಶಿಫಾರಸ್ಸು ಮಾಡಲು ಮರಾಠ ಸಮಾಜದವರು ರಾಜ್ಯಾದ್ಯಂತ ಪ್ರತಿಭಟನೆ ನಡೆಸಿ ಸರ್ಕಾರಕ್ಕೆ ಮನವಿ ಪತ್ರ ಸಲ್ಲಿಸಿ ರಾಜ್ಯದ ಬೇರೆ ಬೇರೆ ಕಡೆಗಳಿಂದ ಮೇಲಿಂದ ಮೇಲೆ ಪ್ರತಿಭಟನೆ ನಡೆಯುತ್ತಿದ್ದು, ಇಲ್ಲಿಯವರೆಗೆ ಸರಕಾರ ಯಾವುದೇ ತರಹದ ನಿರ್ಧಾರ ಕೈಗೊಳ್ಳದೇ ಇರುವುದರಿಂದ ಮರಾಠ ಸಮಾಜದವರು ಮುಂದಿನ ದಿನಗಳಲ್ಲಿ ಉಗ್ರ ಪ್ರತಿಭಟನೆ ಕೈಗೊಳ್ಳಲು ತೀರ್ಮಾನಿಸಿರುವುದು ಸರಕಾರದ ಗಮನಕ್ಕೆ ಬಂದಿದೆಯೇ (ವಿವರ ನೀಡುವುದು). | ಬಂದಿದೆ.<br><br>ಅಧ್ಯಕ್ಷರು, ಮರಾಠ ಹಿತಚಿಂತಕ ಸಂಘ, ಭವಾನಿ ಮಂದಿರ, ಕಿಲ್ಲಾ, ಬಾಗಲಕೋಟೆ ಇವರು ಸನ್ಮಾನ್ಯ ಮುಖ್ಯ ಮಂತ್ರಿಗಳಿಗೆ ದಿ:31-07-2017ರಲ್ಲಿ ಸಲ್ಲಿಸಿರುವ ಮನವಿ ಯಲ್ಲಿ ಕರ್ನಾಟಕ ರಾಜ್ಯದ ಹಿಂದುಳಿದ ವರ್ಗಗಳ ಆಯೋಗದ ಶಿಫಾರಸ್ಸಿನಂತೆ ಮರಾಠ ಸಮಾಜವನ್ನು ಪ್ರವರ್ಗ-3 ಬಿ ಯಿಂದ ಪ್ರವರ್ಗ-2ಎ ಗೆ ಸೇರಿಸುವಂತೆ ಕೋರಿರುತ್ತಾರೆ. |
| ಆ) | ಈಗಾಗಲೇ ಮಹಾರಾಷ್ಟ್ರ ರಾಜ್ಯದಲ್ಲಿ ಮರಾಠ ಸಮುದಾಯಕ್ಕೆ ಶಿಕ್ಷಣ ಹಾಗೂ ಉದ್ಯೋಗದಲ್ಲಿ ಶೇಕಡಾ 16% ರಷ್ಟು ಮೀಸಲಾತಿ ಸೌಲಭ್ಯ ಒದಗಿಸಿದ್ದು, ಒಟ್ಟಾರೆ ಮೀಸಲಾತಿ ಪ್ರಮಾಣ ಶೇಕಡ 68%ತಲುಪಿದ್ದು ಇದನ್ನು ರಾಜ್ಯದಲ್ಲಿಯ ಮರಾಠ ಸಮುದಾಯದವರಿಗೆ ಏಕೆ ನೀಡಿರುವುದಿಲ್ಲ? (ವಿವರ ನೀಡುವುದು). | ಭಾರತ ಸಂವಿಧಾನದ ಅನುಚ್ಛೇಧ 15(4)ರಂತೆ ವಿದ್ಯಾ ಸಂಸ್ಥೆಗಳಲ್ಲಿ ಪ್ರವೇಶ ಮತ್ತು ಅನುಚ್ಛೇಧ 16(4)ರ ಮೇರೆಗೆ ನೇಮಕಾತಿಗಳಲ್ಲಿ ಸೌಲಭ್ಯ ಪಡೆಯುವುದಕ್ಕೆ ಸಂಬಂಧಿ ಸಿದಂತೆ ಹೊರಡಿಸಿರುವ ಸರ್ಕಾರಿ ಆದೇಶ ಸಂಖ್ಯೆ:ಸಕಇ 225 ಬಿಸಿಎ 2000, ದಿ:30.03.2002ರಲ್ಲಿನ ಜಾತಿ ಮೀಸಲಾತಿ ಪಟ್ಟಿಯಲ್ಲಿ ಹಿಂದುಳಿದ ವರ್ಗಗಳನ್ನು ಈ ಕೆಳಕಂಡಂತೆ ವರ್ಗೀಕರಿಸಿ ಪ್ರತಿಶತ ಮೀಸಲಾತಿಯನ್ನು ನಿಗಧಿಪಡಿಸಲಾಗಿದೆ.<br><br>ಪ್ರವರ್ಗ — ನಿಗದಿಪಡಿಸಿರುವ ಪ್ರತಿಶತ ಮೀಸಲಾತಿ<br>ಪ್ರವರ್ಗ-1 — 4%<br>ಪ್ರವರ್ಗ-2(ಎ) — 15%<br>ಪ್ರವರ್ಗ-2(ಬಿ) — 4%<br>ಪ್ರವರ್ಗ-3(ಎ) — 4%<br>ಪ್ರವರ್ಗ-3(ಬಿ) — 5%<br>ಪರಿಶಿಷ್ಟ ಜಾತಿಗಳು — 15%<br>ಪರಿಶಿಷ್ಟ ಪಂಗಡಗಳು — 3%<br>ಒಟ್ಟು — 50%<br><br>ಮರಾಠ ಜನಾಂಗವು ಸದರಿ ಸರ್ಕಾರಿ ಆದೇಶದ ಪ್ರವರ್ಗ 3 'ಬಿ' ನಲ್ಲಿ ಸೇರಿದ್ದು, ಒಟ್ಟಾರೆ 3 'ಬಿ' ನಲ್ಲಿರುವ ಜಾತಿಗಳು ಶೇಕಡ 5ರಷ್ಟು ಮೀಸಲಾತಿ ಸೌಲಭ್ಯ ಪಡೆಯುತ್ತಿದ್ದಾರೆ. |

ಸಂಖ್ಯೆ: ಹಿಂವಕ 293 ಬಿಸಿಎ 2018

(ಸಿ. ಪುಟ್ಟರಂಗಶೆಟ್ಟಿ)
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.